# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1004 (1201) |
| 2 | ಸದಸ್ಯರ ಹೆಸರು | : | ಶ್ರೀ ಅರವಿಂದ ಕುಮಾರ ಅರಳಿ (ವಿಧಾನ ಸಭೆಯಿಂದ ಚುನಾಯಿತರಾದವರು) |
| 3 | ಉತ್ತರಿಸುವ ದಿನಾಂಕ | : | 23.12.2021 |
| 4 | ಉತ್ತರಿಸುವ ಸಚಿವರು | : | ಮಾನ್ಯ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು |

| ಪ್ರಶ್ನೆ | | ಉತ್ತರ |
|---|---|---|
| (ಅ) | ಬೀದರ್ ಜಿಲ್ಲೆಗೆ 2018-19 ರಿಂದ 2021-22ರವರೆಗೆ ಎಷ್ಟು ಅನುದಾನ ಬಿಡುಗಡೆಯಾಗಬೇಕಾಗಿತ್ತು; ಎಷ್ಟು ಅನುದಾನ ಬಿಡುಗಡೆಯಾಗಿದೆ; (ಶಾಸಕರವಾರು ಮಾಹಿತಿ ಒದಗಿಸುವುದು) | ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ ಬೀದರ್ ಜಿಲ್ಲೆಗೆ 2018-19 ರಿಂದ 2021-2022ನೇ ಸಾಲಿನವರೆಗೆ ರೂ.70.00 ಕೋಟಿ ಬಿಡುಗಡೆಯಾಗಬೇಕಿತ್ತು. ಬಿಡುಗಡೆಯಾಗಿರುವ ಅನುದಾನ ರೂ.53.74 ಕೋಟಿಗಳು.<br><br>2018-19ನೇ ಸಾಲಿನಲ್ಲಿ ಭಂಡವಾಳ ವೆಚ್ಚದಡಿ ರಾಜ್ಯಕ್ಕೆ ಬಿಡುಗಡೆಗೆ ಬಾಕಿ ಇರುವ ಅನುದಾನ ರೂ.127.69 ಕೋಟಿ ಅನುದಾನವನ್ನು ನೀತಿ ಸಂಹಿತೆ ಮುಗಿದ ನಂತರ ಬಿಡುಗಡೆ ಮಾಡಲಾಗುತ್ತದೆ. ಈ ಅನುದಾನದಲ್ಲಿ ಬೀದರ್ ಜಿಲ್ಲೆಗೆ 3.13ಕೋಟಿ ಅನುದಾನ ಬಿಡುಗಡೆಯಾಗುತ್ತದೆ.<br><br>2019-20ನೇ ಸಾಲಿನಲ್ಲಿ ಬಿಡುಗಡೆಗೆ ಬಾಕಿ ಇರುವ ಭಂಡವಾಳ ವೆಚ್ಚದ ಒಂದು ಕಂತಿನ ಅನುದಾನ ರೂ.3.04 ಕೋಟಿಗಳನ್ನು ಜಿಲ್ಲಾಧಿಕಾರಿಗಳ ಪಿ.ಡಿ. ಖಾತೆಯಲ್ಲಿ ಲಭ್ಯವಿರುವ ಒಟ್ಟು ರೂ.20.09 ಕೋಟಿ ಅನುದಾನದಲ್ಲಿ ಶೇಕಡ 75%ರಷ್ಟು ವೆಚ್ಚ ಭರಿಸಿದ ನಂತರ ಬಿಡುಗಡೆ ಮಾಡಲಾಗುವುದು.<br><br>2020-21ನೇ ಸಾಲಿನಲ್ಲಿ ಕೋವಿಡ್-19ರ ಕಾರಣದಿಂದ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ನಿಧಿಯ ಅನುದಾನವನ್ನು ರೂ.1.00 ಕೋಟಿಗಳಿಗೆ ಮಿತಿಗೊಳಿಸಲಾಗಿರುತ್ತದೆ.<br><br>2018-19 ರಿಂದ 2021-2022ನೇ ಸಾಲಿನವರೆಗೆ ಶಾಸಕವಾರು / ಕ್ಷೇತ್ರವಾರು ಬಿಡುಗಡೆಯಾಗಿರುವ ಅನುದಾನದ ಮಾಹಿತಿಯನ್ನು ಅನುಬಂಧ-1 ರಲ್ಲಿ ನೀಡಲಾಗಿದೆ. |

....2.,

| | | |
|---|---|---|
| (ಅ) | ಅನುದಾನ ಬಿಡುಗಡೆಯಾಗದ್ದಲ್ಲಿ, ಬಿಡುಗಡೆ ಮಾಡುವುದು ಯಾವಾಗ; ಬಿಡುಗಡೆಯಾಗದಿದ್ದರೆ, ಅಭಿವೃದ್ಧಿ ಕಾರ್ಯಗಳು ಕುಂಠಿತವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | 2018-19ನೇ ಸಾಲಿನಲ್ಲಿ ಬಂಡವಾಳ ವೆಚ್ಚದಡಿ ಬೀದರ್ ಜಿಲ್ಲೆಗೆ ರೂ.3.13 ಕೋಟಿಗಳು ಬಿಡುಗಡೆಯಾಗಬೇಕಾಗಿದ್ದು, ಸದರಿ ಅನುದಾನವನ್ನು ಪೂರಕ ಅಂದಾಜಿನಲ್ಲಿ ಆರ್ಥಿಕ ಇಲಾಖೆಯು ಒದಗಿಸಿದ್ದು, ಈ ಅನುದಾನವನ್ನು ಡಿಸೆಂಬರ್-2021ರ ನಂತರ ಬಿಡುಗಡೆ ಮಾಡಲಾಗುವುದು.<br><br>2021-22ನೇ ಸಾಲಿನಲ್ಲಿ ಮೊದಲನೇ ಮತ್ತು ಎರಡನೇ ಕಂತಿನ ಅನುದಾನವಾಗಿ ಪ್ರತಿ ಕ್ಷೇತ್ರಕ್ಕೆ ರೂ.1.00 ಕೋಟಿಗಳನ್ನು ಬಿಡುಗಡೆಗೊಳಿಸಲಾಗಿದ್ದು, ಮೂರನೇ ಕಂತಿನ ಅನುದಾನದ ಬಿಡುಗಡೆಗೆ ಆರ್ಥಿಕ ಇಲಾಖೆಯು ಸಹಮತಿ ನೀಡಿದ್ದು, ಸದರಿ ಕಂತಿನಲ್ಲಿ ತಲಾ ರೂ.50.00 ಲಕ್ಷಗಳನ್ನು ನೀತಿ ಸಂಹಿತೆ ಮುಗಿದ ನಂತರ ಬಿಡುಗಡೆಗೊಳಿಸಲಾಗುವುದು. ಬಿಡುಗಡೆಯಾದ ಅನುದಾನ ಹಾಗೂ ಆರಂಭಿಕ ಶಿಲ್ಕು ಸೇರಿ ಒಟ್ಟಾರೆ ಅನುದಾನದಲ್ಲಿ ಶೇ.75 ರಷ್ಟು ವೆಚ್ಚವಾದಲ್ಲಿ ನಾಲ್ಕನೇ ಕಂತಿನ ಅನುದಾನವನ್ನೂ ಸಹ ಬಿಡುಗಡೆ ಮಾಡಲಾಗುವುದು .<br><br>ಇಲ್ಲ<br><br>ಬೀದರ್ ಜಿಲ್ಲಾಧಿಕಾರಿಗಳ ಪಿ.ಡಿ. ಖಾತೆಯಲ್ಲಿ ಅಕ್ಟೋಬರ್-21ರ ಅಂತ್ಯಕ್ಕೆ ಇನ್ನು ರೂ. 20.09 ಕೋಟಿ ಅನುದಾನ ಲಭ್ಯವಿರುವುದರಿಂದ ಅಭಿವೃದ್ಧಿ ಕಾರ್ಯಗಳು ಕುಂಠಿತವಾಗಿರುವುದಿಲ್ಲ ಹಾಗೂ ಪಿ.ಡಿ. ಖಾತೆಯಲ್ಲಿರುವ ಒಟ್ಟು ಅನುದಾನವನ್ನು ಪ್ರತಿಕ್ಷೇತ್ರಕ್ಕೆ ರೂ.2.00 ಕೋಟಿಗಳ ಮಿತಿಯಲ್ಲಿ ವೆಚ್ಚ ಮಾಡಲು ದಿನಾಂಕ: 13.08.2021ರ ಸುತ್ತೋಲೆಯಲ್ಲಿ ತಿಳಿಸಲಾಗಿದೆ. |

**ಸಂಖ್ಯೆ: ಪಿಡಿಎಸ್ 151 ಕೆಎಲ್‌ಎಸ್ 2021**

(ಮುನಿರತ್ನ)
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಸಚಿವರು